# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly, KOPPA-CHM. ಫೋನ್ : 114

8ನೇ ವರ್ಷ 46ನೇ ಸಂಚಿಕೆ ಕೊಪ್ಪ 15-7-1990 ಭಾನುವಾರ ಬೆಲೆ 60 ಪೈಸೆ


## ಶಂಕರ್ ಕಾರ್ಮಿಕರ ಹೊಸ ಬೇಡಿಕೆ ಪಟ್ಟಿ : ಉದಾರ ನಿಲುವು ತಳೆಯಲು ಆಗ್ರಹ

ಕೊಪ್ಪ : ಶಂಕರ್ ಸಾರಿಗೆ ಸಂಸ್ಥೆ ಕಾರ್ಮಿಕರ ಸವಲತ್ತುಗಳ ಬಗೆಗಿನ 3 ವರ್ಷಗಳ ಈ ಹಿಂದಿನ ಒಪ್ಪಂದವು 30-6-1990ಕ್ಕೆ ಮುಗಿದಿದ್ದು, ತದನಂತರದಲ್ಲಿ ಸಂಸ್ಥೆಯ ವಹಿವಾಟು ಮತ್ತು ಕಾರ್ಮಿಕರ ಜೀವನವೆಚ್ಚಕ್ಕನುಗುಣವಾಗಿ ಕಾರ್ಮಿಕರ ವೇತನ, ಸೌಲಭ್ಯಗಳ ಹೆಚ್ಚಳಕ್ಕಾಗಿ ಆಡಳಿತ ವರ್ಗಕ್ಕೆ ಸಲ್ಲಿಸಲಾಗಿರುವ 17 ಅಂಶಗಳ ಹೊಸ ಬೇಡಿಕೆ ಪಟ್ಟಿ ನ್ಯಾಯಯುತ ಹಾಗೂ ಸರಳವಾಗಿರುವುದರಿಂದ, ಈ ಬಗ್ಗೆ ಆಡಳಿತ ವರ್ಗ ಬಿಗು ನಿಲುವು ತಾಳದೆ ಉದಾರ ದೃಷ್ಟಿಯಿಂದ ಬೇಡಿಕೆಗಳನ್ನು ಈಡೇರಿಸಬೇಕೆಂದು ಕೊಪ್ಪದಲ್ಲಿ ಜು. 8 ರಂದು ನಡೆದ ಕಾರ್ಮಿಕರ ಸಂಘದ ಕಾರ್ಯಕಾರಿ ಸಮಿತಿ ಸಭೆ ಒತ್ತಾಯಿಸಿದೆ.

ಸಂಘದ ಮುಖಂಡರಾದ ಎನ್. ಆರ್. ರಾಮಚಂದ್ರ, ಚಿಕ್ಕೇಗೌಡ ಮತ್ತು ಎಚ್. ಆರ್. ಸಂಜೀವ ಇವರ ಮೇಲೆ "ರೌಡಿ ಶೀಟ್" ತೆರೆಯಲು ಪೋಲೀಸರು ನಡೆಸಿರುವ ಕುತಂತ್ರವನ್ನು ಸಭೆ ಖಂಡಿಸಿ, ಮಾಲೀಕರ ಕೈ ಗೊಂಬೆಯಾಗಿ ಕಾರ್ಮಿಕ ವಿರೋಧಿ ನೀತಿಯನ್ನು ಅನುಸರಿಸುತ್ತಿರುವ ಠಾಣಾಧಿಕಾರಿ ದುಗ್ಗಪ್ಪನವರ ಮೇಲೆ ಕ್ರಮ ಕೈಗೊಳ್ಳಬೇಕೆಂದು ಸರ್ಕಾರವನ್ನು ಒತ್ತಾಯಿಸಿತು.

ಆಗಸ್ಟ್ 6 ರಿಂದ 12ರ ವರೆಗೆ ತಮಿಳುನಾಡಿನಲ್ಲಿ ನಡೆಯುವ ಎ.ಐ.ಟಿ.ಯು.ಸಿ. ಅಖಿಲ ಭಾರತ ಕಾರ್ಮಿಕ ಸಮಾವೇಶಕ್ಕೆ ಸಂಘದ ಪ್ರತಿನಿಧಿಯಾಗಿ ಚಿಕ್ಕೇಗೌಡ ಆಯ್ಕೆಯಾಗಿದ್ದಾರೆ.

### ಕೃಷಿ ಪತ್ರಿಕೋದ್ಯಮ ತರಬೇತಿ ಶಿಬಿರ ಸೆಪ್ಟೆಂಬರ್ 13-16ಕ್ಕೆ

ಕೊಪ್ಪ : ಅಡಿಕೆ ಪತ್ರಿಕೆ ನೇತೃತ್ವದಲ್ಲಿ ಇಲ್ಲಿ ಸೆಪ್ಟೆಂಬರ್ 13ರಿಂದ 16ರವರೆಗೆ ಕೃಷಿ ಪತ್ರಿಕೋದ್ಯಮ ತರಬೇತಿ ಶಿಬಿರ ನಡೆಯುತ್ತದೆ. ಆಸಕ್ತಿಯುಳ್ಳ ಕೃಷಿಕರು ಅಡಿಕೆ ಪತ್ರಿಕೆ, ಎಳ್ಳುಡಿ, ಪುತ್ತೂರು—ಇಲ್ಲಿಗೆ ಸಂಪರ್ಕಿಸಬಹುದು.

ಜು. 7ರಂದು ಕೊಂಡ ಮಾರುತಿ ವ್ಯಾನ್‌ನಲ್ಲಿ ಜು. 11ರಂದು ಗಂಧ ಸಾಗಣೆ !

## ಗಂಧ ಸಹಿತ ವ್ಯಾನ್ ವಶ, ಒಬ್ಬನ ಸೆರೆ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

**ಶೃಂಗೇರಿ : ಹೊಚ್ಚ ಹೊಸದಾಗಿ ಕೊಂಡ ಮಾರುತಿ ವ್ಯಾನಿನಲ್ಲಿ ಚೊಚ್ಚಲ ಟ್ರಿಪ್‌ನಲ್ಲೇ ಗಂಧ ತುಂಬಿ ಸಾಗಿಸಲು ಹೋಗಿ ಸಿಕ್ಕಿಬಿದ್ದವರ ಕಥೆ ಇದು.**

ಅವರಲ್ಲಿ ಉಪ್ಪಿನಂಗಡಿಯ 32ರ ಪ್ರಾಯದ ಸುಂದರಗೌಡ ಸೆರೆ ಸಿಕ್ಕಿದ್ದಾನೆ. ಇನ್ನಿಬ್ಬರು ತಪ್ಪಿಸಿಕೊಂಡಿದ್ದು, ಅವರಲ್ಲೊಬ್ಬ ಮೂಡಿಗೆರೆ ತಾ|| ಕೆಳಗೂರಿನ ಸತೀಶಗೌಡ ಎಂದು ಗೊತ್ತಾಗಿದೆ. 84 ಸಾವಿರ ರೂ. ಕೊಟ್ಟು ಜು. 7ರಂದು ಕೊಂಡಿದ್ದ ಸಿಆರ್ ಎಕ್ಸ್ 523 ನಂಬರಿನ ಮಾರುತಿ ವ್ಯಾನಿನಲ್ಲಿ ಜು. 11ರಂದು ಮೂಡಿಗೆರೆ ಬಳಿಯಿಂದ ಸುಮಾರು 20 ಸಾವಿರ ರೂ. ಬೆಲೆಯ 203 ಕಿಲೊ ಗಂಧ ತುಂಬಿ ಶೃಂಗೇರಿ ಮೂಲಕ ಮಂಗಳೂರಿನ ಕಡೆಗೆ ಸಾಗಿಸುತ್ತಿದ್ದಾಗ, ಡಿ.ಎಫ್.ಓ ಸೂಚನೆ ಮೇರೆಗೆ ಇಲ್ಲಿನ ವಲಯ ಅರಣ್ಯ ಸಿಬ್ಬಂದಿ ವಶಪಡಿಸಿಕೊಂಡಿದ್ದಾರೆ.

### ಕೊಪ್ಪ ಪ್ರ. ದ. ಕಾಲೇಜು : ಬಿ.ಎ. ಫಲಿತಾಂಶ ಉತ್ತಮ

ಕೊಪ್ಪ : ಇಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಅಂತಿಮ ಬಿ. ಎ. ಪರೀಕ್ಷೆಯಲ್ಲಿ 27 ಜನರ ಪೈಕಿ 26 ಜನ ತೇರ್ಗಡೆಯಾಗಿ ಶೇ. 96 ರ ಫಲಿತಾಂಶ ಬಂದಿದೆ. ಅಂತಿಮ ಬಿ ಕಾಂ. ನಲ್ಲಿ 37 ಕ್ಕೆ 21 ಜನ (54%) ತೇರ್ಗಡೆಯಾಗಿದ್ದಾರೆ.

### ಮಹಿಳೆ ಮೇಲೆ ಅತ್ಯಾಚಾರ : ಆರೋಪಿಯ ಬಂಧನ

ಬಿಳಾಲುಕೊಪ್ಪ : ಇಲ್ಲಿನ ಚಂದ್ರೇಗೌಡ ಎಂಬವನು ಜು. 8 ರಂದು ತಂಬಿ ...ಂಬವರ ಮಗಳನ್ನು ದಾರಿಯಲ್ಲಿ ಅಡ್ಡಗಟ್ಟಿ ಕಾಡಿಗೆ ಎಳೆದೊಯ್ದು ಅತ್ಯಾಚಾರವೆಸಗಿದ್ದು, ಆರೋಪಿಯನ್ನು ಬಾಳೆಹೊನ್ನೂರು ಪೋಲೀಸರು ಬಂಧಿಸಿದ್ದಾರೆ.

ಮಹಿಳೆಗೆ ತೀವ್ರವಾದ ಗಾಯಗಳಾಗಿ ...ರೆ ಪ್ರಜ್ಞಾವಸ್ಥೆಯಲ್ಲಿದ್ದುದಾಗಿ ಪೋಲೀಸರು ತಿಳಿಸಿದ್ದಾರೆ.

(ಗ್ರಾಮಸ್ಥರ ಒಂದು ವರದಿಯ ಪ್ರಕಾರ, ಆರೋಪಿಯು ಅತ್ಯಾಚಾರ ಯತ್ನ ನಡೆಸಿದ್ದು ತಿಳಿದು ಗ್ರಾಮಸ್ಥರು ಕೂಡಲೇ ಪೋಲೀಸರಿಗೆ ತಿಳಿಸಲಾಗಿ ಆತನನ್ನು ಬಂಧಿಸಲಾಯಿತೆಂದು ತಿಳಿದು ಬಂದಿದೆ)

### 52 ಅಂಗುಲ ಮಳೆ

ಕೊಪ್ಪದಲ್ಲಿ ಜು. 14ರವರೆಗೆ ಆದ ಮಳೆಯ ಪ್ರಮಾಣ 52 ಅಂಗುಲ

### ಸ್ಪೋಕನ್ ಇಂಗ್ಲಿಷ್ ಆರಂಭಿಕ ಕೋರ್ಸ್

ಹರಿಹರಪುರ : ಇಲ್ಲಿನ ರಾಷ್ಟ್ರೋತ್ಥಾನ ಬಳಗದವರು ಜುಲೈ 20 ರಿಂದ ಹತ್ತು ದಿನಗಳ ಕಾಲ ಸ್ಪೋಕನ್ ಇಂಗ್ಲಿಷ್ ಆರಂಭಿಕ ಕೋರ್ಸನ್ನು ನಡೆಸಲಿದ್ದಾರೆ. ದಿನದಲ್ಲಿ ಒಂದು ಗಂಟೆ ಕಾಲ ನಡೆಯುವ ಈ ಕೋರ್ಸಿಗೆ ಎಸ್.ಎಸ್.ಎಲ್.ಸಿ. ಉತ್ತೀರ್ಣರಾದ ಮತ್ತು ಅದಕ್ಕಿಂತ ಹೆಚ್ಚು ವಿದ್ಯಾಭ್ಯಾಸ ಪಡೆದ ವಿದ್ಯಾರ್ಥಿಗಳು ಹಾಗೂ ಇತರರು ಅರ್ಹರು. ಆಸಕ್ತರು, ಸುಧಾಕರ್, ಮೆನೇಜರ್, ಡಿ.ಸಿ.ಸಿ. ಬ್ಯಾಂಕ್, ಹರಿಹರಪುರ, ಅಥವಾ ಕೆ. ಆರ್. ಭಾಸ್ಕರಾಚಾರ್, ಅಧ್ಯಾಪಕರು ಅಥವಾ ರಾಮಪ್ರಸಾದ್, ಉಪನ್ಯಾಸಕರು, ಆ. ರಾ. ಸ. ಕಿರಿಯ ಕಾಲೇಜು—ಇವರಲ್ಲಿ ತಮ್ಮ ಹೆಸರನ್ನು ನೊಂದಾಯಿಸಬಹುದು.

(ವರದಿ : ಅನಿಲ)

### ನ. ರಾ. ಪುರ ವಾಣಿಜ್ಯ ಶಾಲೆಗೆ 3 ನೇ ರ್‍ಯಾಂಕ್

ನ. ರಾ. ಪುರ : ಇಲ್ಲಿನ ಜ್ಯೋತಿ ವಾಣಿಜ್ಯ ಶಾಲೆಯ ವಿದ್ಯಾರ್ಥಿನಿ ಕು| ಎ. ಎನ್. ಸುಧಾ ಕಳೆದ ಮೇ ತಿಂಗಳ ಕನ್ನಡ ಬೆರಳಚ್ಚು ಪ್ರೌಢ ದರ್ಜೆ ಪರೀಕ್ಷೆಯಲ್ಲಿ ರಾಜ್ಯ ಮಟ್ಟದ 3 ನೇ ರ್‍ಯಾಂಕ್ ಪಡೆದಿದ್ದಾರೆ.

ಈ ಶಾಲೆಯಲ್ಲಿ 49 ಪರೀಕ್ಷಾರ್ಥಿಗಳ ಪೈಕಿ 8 ಪ್ರಥಮ, 17 ದ್ವಿತೀಯ ಮತ್ತು 6 ತೃತೀಯ ಶ್ರೇಣಿ–ಒಟ್ಟು 31 ಮಂದಿ ತೇರ್ಗಡೆಯಾಗಿದ್ದಾರೆ (ಶೇ. 63)

**ಬಾಳೆಹೊನ್ನೂರಿಗೆ ಶೇ. 57**

ಬಾಳೆಹೊನ್ನೂರಿನ ವಿದ್ಯಾ ವಾಣಿಜ್ಯ ಶಾಲೆಯಲ್ಲಿ ಶೇ. 57 ಮಂದಿ ತೇರ್ಗಡೆಯಾಗಿದ್ದಾರೆ.

ಚಿಕ್ಕಮಗಳೂರು ಲೋಕಸಭೆ ಚುನಾವಣೆ ಫಲಿತಾಂಶ ಪ್ರಕಟಣೆ:

## ಆಕಾಶವಾಣಿಯಿಂದ ತಿದ್ದುಪಡಿ ಪ್ರಸಾರ

ಚಿಕ್ಕಮಗಳೂರು : ಕಳೆದ ನವೆಂಬರಿನಲ್ಲಿ ನಡೆದ ಲೋಕಸಭಾ ಚುನಾವಣೆ ಫಲಿತಾಂಶ ಪ್ರಕಟಿಸುವಾಗ ಆಕಾಶವಾಣಿಯ ಬೆಂಗಳೂರು ಮತ್ತು ದೆಹಲಿ ಕೇಂದ್ರಗಳು 2ನೇ ಸ್ಥಾನ ಜನತಾ ದಳದ ಈವಾವಾಜ್ ಗಳಿಸಿದ್ದಾಗಿ ನಾಲ್ಕಾರು ಬಾರಿ ಪ್ರಕಟಿಸಿದ್ದವು ಆದರೆ 2ನೇ ಸ್ಥಾನ ಗಳಿಸಿದ್ದ ಸಿಪಿಐ ಅಭ್ಯರ್ಥಿ ಬಿ. ಕೆ ಸುಂದರೇಶ್ ಈ ತಪ್ಪು ತಿದ್ದುಪಡಿ ಮಾಡುವಂತೆ ಬರೆದ ಪತ್ರಕ್ಕೆ ಉತ್ತರವಾಗಿ ಆಕಾಶವಾಣಿ ನೀಡಿದ ಕ್ಷಮಾಯಾಚನೆಯ ಪತ್ರದಿಂದ ತೃಪ್ತರಾಗದೆ, ತಮ್ಮ ವಕೀಲರಾದ ಮಹೇಂದ್ರ ಅವರ ಮೂಲಕ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಕ್ರಮ ಕೈಗೊಂಡು, ಆಕಾಶವಾಣಿಗೆ ನೋಟೀಸು ಜಾರಿ ಮಾಡಿದ್ದರು.

ಜುಲೈ 7ರ ಬೆಳಗಿನ ತನ್ನ ಕಾರ್ಯಕ್ರಮವೊಂದರಲ್ಲಿ ಆಕಾಶವಾಣಿಯು ಸದರಿ ಸಮಾಚಾರ ಪ್ರಕಟಣೆಯಲ್ಲಾದ ದೋಷಕ್ಕೆ ವಿಷಾದ ಸೂಚಿಸಿ, ಸರಿಯಾದ ವಿಚಾರವನ್ನು ಬಿತ್ತರಿಸುವ ಮೂಲಕ ತನ್ನ ತಪ್ಪನ್ನು ತಿದ್ದಿಕೊಂಡಿದೆ. ಈ ಹಿನ್ನೆಲೆಯಲ್ಲಿ ಮೊಕದ್ದಮೆಯನ್ನು ಮುಂದುವರಿಸಬೇಕೆ–ಬೇಡವೆ ಎಂಬುದನ್ನು ಪರಿಶೀಲಿಸುತ್ತಿರುವುದಾಗಿ ಸುಂದರೇಶ್ 'ಮುಂಜಾವು'ಗೆ ತಿಳಿಸಿದ್ದಾರೆ.

## ಮೂಲ್ಕಿಯಲ್ಲಿ ಕದ್ದ ಲಾರಿ ಕೊಪ್ಪದಲ್ಲಿ ಪತ್ತೆ

ಕೊಪ್ಪ: ಮೂರು ದಿನಗಳಿಂದ ಇಲ್ಲಿನ ಮಾರ್ಕೆಟ್‌ನಲ್ಲಿ ನಿಲ್ಲಿಸಲಾಗಿದ್ದ, ವಾರಸುದಾರರಿಲ್ಲದ ಟಾಟಾ 407 ಮಿನಿ ಲಾರಿಯನ್ನು ಜು. 14ರಂದು ಇಲ್ಲಿನ ಪೋಲೀಸರು ವಶಕ್ಕೆ ತೆಗೆದುಕೊಂಡಿದ್ದು, ಅದು ಮೂಲ್ಕಿಯಲ್ಲಿ ಕಳುವಾಗಿದ್ದುದೆಂದು ಗೊತ್ತಾಗಿದೆ. ಇದನ್ನು ಗಂಧವೋ ಎಂಥದೋ ಕಳ್ಳ ಸಾಗಣೆಗೆ ಬಳಸಿರಬೇಕೆಂದು ಸಾರ್ವಜನಿಕರ ಶಂಕೆ. ಲಾರಿಯ ಮೇಲಿನ ನಂಬರು ಮತ್ತು ಆರ್.ಸಿ ನಂಬರು ಬೇರೆಬೇರೆಯಾಗಿವೆ.

ಜು. 13ರಂದು ಲಾಡ್ಜ್ ಒಂದರಲ್ಲಿ ಇಳಿದುಕೊಂಡಿದ್ದ ಸಂಶಯಾಸ್ಪದ ವ್ಯಕ್ತಿಗಳನ್ನು ಅವರು ತಂದಿದ್ದ ಬೈಕ್ ಸಹಿತ ಪೋಲೀಸರು ತಡೆ ಹಿಡಿದಿದ್ದು, ತನಿಖೆ ನಡೆಯುತ್ತಿದೆ. ಪತ್ರಿಕೆಯೊಂದರ ಸ್ಥಳೀಯ ಪ್ರತಿನಿಧಿ ಹಂಸ ಓಡಿ ತಪ್ಪಿಸಿಕೊಳ್ಳಲೆತ್ನಿಸಿದ ಇವರನ್ನು ಹಿಡಿಯುವಲ್ಲಿ ಪೋಲೀಸರಿಗೆ ನೆರವಾದರೆಂದು ಸುದ್ದಿ.

# ಎರಡು ದೆವ್ವಗಳ ಕತೆ

ಎರಡು ಹೆಣ್ಣು ದೆವ್ವಗಳು ಸ್ಮಶಾನದಲ್ಲಿ ಭೇಟಿಯಾದವು. ಒಂದು ಅರೆಬೆಂದ ಹೆಣದ ಮೇಲೆ ಕುಳಿತುಕೊಂಡು ಮಾತಿಗಿಳಿದವು. ಹೆಣ್ಣು ದೆವ್ವಗಳಲ್ವೆ ? ಒಂದು ದೆವ್ವ ಇನ್ನೊಂದಕ್ಕೆ—"ಏನ್ರೀ ಅಡಿಗೆ ಆಯಿತಾ ? ಏನು ಹುಳಿ ನಿಮ್ಮ ಮನೆಯಲ್ಲಿ ?" ಎಂದು ಕೇಳಲು ಹೋಗಿ, ತಡಬಡಿಸಿ—"ಏನ್ರಿ, ನೀವು ಹೇಗೆ ಸತ್ತಿರಿ ?" ಎಂದು ಕೇಳಿತು.

ಇನ್ನೊಂದು ದೆವ್ವ ಹೇಳತೊಡಗಿತು—ಅಯ್ಯೋ, ವರದಕ್ಷಿಣೆ ತರಲಿಲ್ಲ ನಾನು ಅಂತ ನನ್ನ ಅತ್ತೆ-ಮಾವ ಎಲ್ಲಾ ಕಾಟ ಕೊಡುತ್ತಿದ್ದರು ಕಣ್ರೀ. ನನ್ನ ಗಂಡ ಅನ್ನೋನು ಅದನ್ನು ನೋಡಿಯೂ ಸುಮ್ಮನಿದ್ದ. ಮಕ್ಕಳು ಬೇರೆ ಆಗಿರಲಿಲ್ಲ, ಕೇಳಬೇಕೆ ? ಯಾರ ಹತ್ತಿರ ನನ್ನ ದುಃಖ ಹೇಳಕೊಳ್ಳೋದು ? ನಮ್ಮ ಮನೆ ಹಿಂದೆ ಒಂದು ಬೂರುಗನ ಮರ ಇತ್ತು. ಅದನ್ನ ಕಣ್ಣೀರಿಂದ ತೋಯಿಸ್ತಿದ್ದೆ ಕಣ್ರೀ.

ಒಂದಿನ ಏನಾಯ್ತೂಂತಾ— ಎಲ್ಲರೂ ಸೇರಿ ಹೀನಾಯವಾಗಿ ನನ್ನ ತಂದೆ-ತಾಯಿಂದಿರನ್ನ ಬೈಯಲಿಕ್ಕೆ ಪ್ರಾರಂಭ ಮಾಡಿದರು. ಹೀಗೇ ಗೋಳು ಹೊಯ್ಕೊಂಡರೆ ಸತ್ತು ಹೋಗ್ತೀನಿ ಅನ್ತಾ ನನ್ನ ಗಂಡನ ಕಾಲು ಹಿಡಿದುಕೊಂಡೆ. ಅವನು ಅವನ ಅಪ್ಪ-ಅಮ್ಮಂದಿರ ಮುಖ ನೋಡಿದ. ಏನು ಆವೇಶ ಬಂತೋ ನನಗೆ. ಪಕ್ಕದಲ್ಲಿದ್ದ ಸೀಮೆ ಎಣ್ಣೆ ಡಬ್ಬೀನ ಎತ್ತಿ ತಲೆ ಮೇಲೆ ಸುರಕೊಂಡೆ ಎಣ್ಣೇನ. "ಬೆಂಕಿ ಪೆಟ್ಟಿಗೆ ಕೊಡಪ್ಪಾ" ಎಂದಳು ನನ್ನ ಅತ್ತೆ ! ಪ್ರಾಣ ತೆಗೆದುಕೊಟ್ಟ !! ಸರಕ್ಕನೇ ಕಡ್ಡಿ ಗೀಚಿ ಮೈಗೆ ತಾಗಿಸಿಕೊಂಡೆ.

ಅಯ್ಯೋ ಏನು ಉರೀ. ಬದುಕ್‌ಬೇಕೂ ಅಂತ ಅನ್ನಿಸ್ತ್ರೀ ಆವಾಗ. ಬದುಕಿಸಿ, ಬದುಕಿಸಿ ಅಂತ ಓಡಿದೆ. ಮೂರು ಜನಾನೂ ಓಡಿ ಬಿಡೋದೆ ನನ್ನ ರೂಮಿನಲ್ಲಿ ಕೂಡಿ ಹಾಕಿ ! ನನ್ನ ಗಂಡ ಕೊನೇ ಗಳಿಗೇಲಾದ್ರೂ, 'ಅಯ್ಯೋ, ನನ್ನ ಚಿನ್ನಾ....!' ಅಂದಿದ್ದರೆ, ಈಗಲೂ ದುಃಖದಲ್ಲಿ ಬೇಯ್ತಾ ಇದ್ದೆ ಕಣ್ರೀ. ಆದರೆ....ಅವನೇನೂ ಅನ್ಲಿಲ್ಲ. ಅಪ್ಪ-ಅಮ್ಮನ ಹಿಂದೆ ಓಡಿಬಿಟ್ಟ. ಈಗ್ಲೇ ನಾನು ಸುಖವಾಗಿ ಇದೀನಿ ಅನ್ನೋ ಬೇಕು....ಎಂದು ನಿಟ್ಟುಸಿರುಬಿಟ್ಟಿತು.

ಆದಿರ್ಲಿ. ನನ್ನ ಪುರಾಣಾನೇ ಆಯಿತು. ನಿಮ್ಮ ಕತೆ ಏನು ಅಂತು ದೆವ್ವ.

ಇನ್ನೊಂದು ದೆವ್ವ ನಸು ನಕ್ಕು, ಅಯ್ಯೋ, ನಿಮ್ಮಷ್ಟು ನತದೃಷ್ಟಳಲ್ಲ ಕಣ್ರೀ ನಾನು. ನನಗೇನೂ ಕಾಟ ಕೊಡೋ ಅತ್ತೆ ಮಾವ ಇರಲಿಲ್ಲ. ನಾನು-ನನ್ಗಂಡ ಇಬ್ರೇ. ಆದ್ರೇನ್ಮಾಡೋದು. ಗಂಡ ಅನ್ನೋ ಆ ಕಿರಾತಕನಿಗೆ ಸಂಶಯ ಅಂದರೆ ಸಂಶಯ. ನಾನು ಯಾರ ಹತ್ತರಾನೂ ಮಾತಾಡಬಾರದು. ಒಂದು ಕಡೆಗೂ ಹೋಗಬಾರದು. ತಾನು ಕೆಲಸಕ್ಕೆ ಹೋಗುವಾಗ ಮುಂದುಗಡೆ – ಹಿಂದುಗಡೆ ಬೀಗ ಹಾಕಿಕೊಂಡು ಹೋಗೋನು! ಎಷ್ಟೋ ಬಾರಿ ಹಿಂದುಗಡೆ ಬಾಗಿಲನೇ ಹಾಕ್ತಿರಲಿಲ್ಲ .ಅವನು....ಅಂತ ಜೋರಾಗಿ ನಗ್ತಾ ನಗ್ತಾ ಕೆಮ್ಮಲಿಕ್ಕೆ ಶುರು ಮಾಡ್ತು ದೆವ್ವ.

ಸ್ವಲ್ಪ ಸುಧಾರಿಸಿಕೊಂಡು ಮುಂದುವರಿಸ್ತು — ಸಣ್ಣ ಪುಟ್ಟ ಕಾರಣಕ್ಕೂ—ಕಾರಣ ಇಲ್ಲದಿದ್ದರೂ—ಹೊಡೆತ ಬಡಿತ ನಕ್ಕರೂ ಕಷ್ಟ, ಅತ್ತರೂ ಕಷ್ಟ. ಒಗೆದ ಸೀರೆ ಉಟ್ಟರೂ ಅವನಿಗೆ ಸಂಶಯ. ಇಷ್ಟರ ನಡುವೆ ಒಂದು ಹೆಣ್ಣು ಮಗೂ ಆಯಿತು ಮಗು ಹೆಣ್ಣು ಅಂತ ಬೇರೆ ಮುನಿಸು. ನನ್ನ ತಾಯಿ ಮನೆಯಲ್ಲೋ ಕಡು ಬಡತನ; 'ನಿನ್ನ ಹಣೆ ಬರಹ' ಅಂದ್ ಬಿಟ್ಟರು. ಎಲ್ಲಾದರೂ ಓಡಿ ಹೋಗಿ ಕೆಲಸಾನಾದರೂ ಮಾಡೋಣ ಅಂದರೆ ವಿದ್ಯೆ ಇಲ್ಲ. ಹೆದರಿಕೆ ಬೇರೆ....

ಬಹಳ ಮರ್ಯಾದಸ್ಥ ಕಣ್ರೀ ನನ್ನ ಗಂಡ ! ಅವ್ನು ಹೊಡೆದಾಗ, ನನ್ನ ಅಳು-ಚೀರಾಟ ಎಲ್ಲಿ ಪಕ್ಕದ ಮನೆಯವರಿಗೆ ಕೇಳುತ್ತೋ ಅಂತ ಬಾಯಿಗೆ ಬಟ್ಟೆ ತುರುಕಿ ಹೊಡೆಯೋನು !! ಅಸಹ್ಯ ಮಾತುಗಳು, ಮುಖದ ಮೇಲೆ ಉಗುಳುವುದು.... ಅಬ್ಬಾ ಈ ಹಾಳು ರಗಳೆಯೇ ಬೇಡ ಅಂತ ನನ್ನ ಮಗೂನ ಹೊಳೆಗೆ ಎಸೆದು ನಾನೂ ಹಾರಿ ಬಿಟ್ಟೆ ಕಣ್ರೀ. ಇಷ್ಟೇ ನನ್ನ ಕತೆ—ಅಂತು ದೆವ್ವ.

ಇನ್ನೊಂದು ದೆವ್ವ — "ದರಿದ್ರದವನು. ಈಗಾದರೂ ಬುದ್ಧಿ ಬಂದು ಪಶ್ಚಾತ್ತಾಪ ಪಟ್ಕೋತಿರಬಹುದು" ಅಂತು.

ಸಂಗಾತಿ ದೆವ್ವ ಬಿದ್ದು ಬಿದ್ದು ನಗಲು ಪ್ರಾರಂಭ ಮಾಡ್ತು; ಮತ್ತೆ ಕೆಮ್ಮಿ ಸುಧಾರಿಸಿಕೊಂಡು—"ಹೌದ್ರೀ—ಈಗ ಪಶ್ಚಾತ್ತಾಪ ಪಟ್ಕೋತಾ ಇದಾನೆ ! ನಾನು ಸತ್ತ ತಿಂಗಳಿಗೇ ಮತ್ತೊಂದು ಮದುವೆ ಆದ ಮಹಾನುಭಾವ !" ಅಂತು.

"ಎಲಾ ದರಿದ್ರದವನೇ. ಯಾವಾಗ ಬುದ್ಧಿ ಬರಬೇಕು ಇವಕ್ಕೆ....ಅಲ್ಲ ಮೊದಲು ನಮ್ಮ ಹೆಣ್ಣು ಕುಲಕ್ಕೆ ಬುದ್ಧಿ ಬರ್‌ಬೇಕ್ರೀ ಇಷ್ಟು ಹಿಂಸೆ – ಅಪಮಾನಾನ 'ಹಣೆಬರಹ' ಅಂತ ಸಹಿಸ್ಕೊಳ್ತೀವಲ್ಲ. ಹಳೇ ಮೆಟ್ಟನಲ್ಲಿ ಹೊಡ್ಕೋಬೇಕು ನಮ್ಮನ್ನ ನಾವೇ.... ಇನ್ನೂ ಏನನ್ನೋ ಹೇಳಲು ಬಾಯ್ತೆರೆಯುವಾಗ ಬೆಳಕು ಮೂಡಿ — ಎರಡೂ ದೆವ್ವಗಳು ನಿದ್ರೆ ಮಾಡಲು ಹೋದವು....

—ಎಂಬಲ್ಲಿಗೆ ಈ ಕಥೆ 'ಪ್ರಾರಂಭ' !

—'ಭೂತಯ್ಯ'

## ಪಾಶ್ಚಿಮಾತ್ಯ ದೇಶಗಳಲ್ಲಿ ಕುಡಿತ, ಧೂಮಪಾನ ಇಳಿಮುಖ!

ಕುಡಿತ, ಧೂಮಪಾನದಂಥ ಚಟಗಳು ಪಾಶ್ಚಿಮಾತ್ಯ ದೇಶಗಳ 'ಸಂಪ್ರದಾಯ'ಗಳಾಗಿದ್ದು, ಅಲ್ಲಿನವರ ಅನುಕರಣೆಯಿಂದಾಗಿ ನಮ್ಮಲ್ಲಿ ಈ ದುಶ್ಚಟಗಳು ಸರ್ವವ್ಯಾಪಿಯಾಗಿ ಹೆಚ್ಚುತ್ತಿವೆ. ಆದರೆ ಆ ದೇಶಗಳಲ್ಲಿ ಅವುಗಳ ಸೇವನೆಯ ಪ್ರಮಾಣ ತೀವ್ರವಾಗಿ ಇಳಿಮುಖವಾಗಿದ್ದು, ಇದರಿಂದಾಗಿ ಅಲ್ಲಿ ರಕ್ತದೊತ್ತಡ, ಹೃದಯಾಘಾತಗಳ ಪ್ರಮಾಣ ತುಂಬಾ ಕಡಿಮೆ ಆಗುತ್ತಿದೆ ; ಆದರೆ ನಮ್ಮ ದೇಶದಲ್ಲಿ ಅವು ತೀವ್ರವಾಗಿ ಹೆಚ್ಚುತ್ತಿವೆ.

ಹೀಗೆಂದವರು ಖ್ಯಾತ ಹೃದಯ ತಜ್ಞರಾದ ಲಯನ್ಸ್ ಜಿಲ್ಲಾ ಗೌರ್ನರ್ ಡಾ|| ಶಿವಲಿಂಗಪ್ಪ. ಈಚೆಗೆ ಶೃಂಗೇರಿಯ ಲಯನ್ಸ್ ಕ್ಲಬ್ ಉದ್ಘಾಟಿಸುತ್ತ ಅವರು ಇದನ್ನು ಹೇಳಿದರು.

ಎನ್ನಾಪುರದ ಸಂತೆ ಮಾತು

## ಕಾಡಲ್ಲಿ ಗಂಧ ಇಲ್ಲ! ಊರಲ್ಲಿ ಹುಡ್ಗೀರು ಇರಂಗಿಲ್ಲ!?

(ಪೇಪರ್ ಹಿಡಿದ ಗೌಡ್ರು ತಿಮ್ಮನಿಗೆ ಎದುರಾಗ್ತಾರೆ)

ಈ ಪೇಪರ್ ಸುದ್ದಿ ನೋಡ್ದ್ಲಾ ತಿಮ್ಮ.

ನಿಮ್ಗಿಂತ ಮುಂಚೇನೇ ನೋಡ್ದೆ ಗೌಡ್ರೆ. "ಕೊಪ್ಪದಲ್ಲಿ - ಹೆಣ್ಮಕ್ಕಳ ಮಾರಾಟ". ಅದೇ ತಾನೆ?

ಈ ನೀಚರು ಈ ಊರಿನ ಬೇಕು-ಬೇಕಾದ ಶ್ರೀಮಂತ್ರಿಗೆಲ್ಲಾ ಪೂರೈಸಿ, ಗೋವಾ-ಬೊಂಬಾಯ್ಗೂ ಈ ಹುಡಿಗೇರ್ನ ತಲುಪ್ಸೋ ಸಂಚು ಮಾಡ್ತ್ಯಾರೆ ಅಂದ್ರೆ.... ಛೆ ಛೆ. ಮರ್ಯಾದೆ ಇರೋರು ತಲೆ ತಗ್ಗಿಸ್ಬೇಕ ಕಣ್ಲಾ

ಸಮಾಜದಲ್ಲಿ ಆಳದುಳದಿರೋ ನೀತಿವಂತ ಜನರೂ ಸಹ ಸಂಬಂಧಪಟ್ಟ ಅಧಿಕಾರಿಗಳ-ಅಧಿಕಾರಸ್ಥರ ಧರಾನೇ ಸುಮ್ನಿರೋದ್ರಿಂದ್ಲೇ ಇಂಥ ಜನ ಏನ್ಮಾಡೋಕ್ಕೂ ಹೇಸ್ತಾ ಇಲ್ಲ ಗೌಡ್ರೇ..... ಕಳ್ಳ ಗಂಟು ಮಾಡಿರೋರ್ದ್ದೇ ಇನ್ಮುಂದೆ ರಾಜ್ಯ.... ಬಾಯ್ ಬಡ್ಕೊಳ್ಳಿ....!

ಎಲಾ ಇವ್ನ. ನಾನ್ಯಾಕ್ಲಾ ಬಾಯ್ ಬಡ್ಕೊಳ್ಲಿ-ಹೆಣ್ಣ ಹೋದೋರೇ ಬಡ್ಕೊಳ್ದೆ ಇರೋವಾಗ? ಆದಿರ್ಲಿ, ಈ ತಾಯ್ಗಂಡ್ರು ಯಾರ್‍ಯಾರಂತ ಪತ್ತೆ ಆಗ್ಯಾರೇನ್ಲ ತಿಮ್ಮಾ?

ಏನೋ .... ಮೊನ್ನೆ ಕೊಪ್ಪ ಸಂತೇಲಿ ಮಾತಾಡ್ತಿದ್ರು ನೋಡಿ. ಸಿಗ್ದಾಳ್ಳೋನು ಒಬ್ನಂತೆ, ಕೊಪ್ಪದೋರು ಒಂದಿಬ್ರಂತೆ, ಹುಡಿಗೇರ್ನ ಮರುಳು ಮಾಡಿ ಕರ್ಕಂಬರಾದು, ರುಚಿ ನೋಡೋದು, ಎಂಜ್ಲ ಶ್ರೀಮಂತ್ರಿಗೊಪ್ಸೋದು...

ಶ್ರೀಮಂತ್ರಿಗೆ ಎಂಜ್ಲಾದ್ರೇನು, ಉಗುಳು-ಉಚ್ಚೆ ಆದ್ರೇನು? ಶ್ರೀಮಂತ್ಕೆ ಸೋಪ್ನಲ್ಲಿ ಗವ್‌ಗುಟ್ತಾರ್‍ಕೋಡು....ಈ ತಲೆ ಹಿಡ್ಕನ್ ಷುಕ್ಕು ಮೊದಲೇನು ಮಾಡ್ತಿದ್ರಂತಲಾ ತಿಮ್ಮ?

ಇದ್ರಲ್ಲಿ ಕೆಲೋರ್ಗೆ ತಿನ್ನೋ ಅನ್ನದ ಕಳ್ಸಾಗಾಕ್ಕೆನೂ ಉಂಟಂತೆ. ಮತ್ತೆ ಕೆಲೋರು ಕಾಡಿನ ಗಂದ ಖಾಲಿ ಮಾಡಿ, ಊರಿನ ಹುಡ್ಗೀರಿಗೆ ಗಂದದೆಣ್ಣೆ ಹಚ್ಚಾಕೆ ಹೊರಟಾರಂತ್ನೋಡ್ರಿ. ಇವ್ರ ಖ್ಯಾತಿ ಎಷ್ಟಾಗ್ಯದಂದ್ರೆ, ಯಾವ್ದಾರು ಹುಡುಗೀನ ಈ ನನಮಕ್ಳು ಮಾತಾಡ್ಸಿದ್ದು ಕಂಡ್ರೆ ಸಾಕು, "ಹಾಂ, ಇವತ್ತು ಸಂಜೆಗೆ ಈ ಹಕ್ಕಿ ಆವುತಿ" ಅಂತ ಜನ ಅಂದ್ಕೊಳೋವಷ್ಟಾಗ್ಯದಂತೆ, ಏನೇಳ್ತೀರಿ !

ಇವ್ರನ್ನ ಹಿಡ್ಯಾಕೆ ಯಾವ ಇಲಾಖೆನೂ ಇಲ್ಲೇನ್ಲಾ ತಿಮ್ಮ?

ಇಲಾಖೆ ಇದ್ರೇನಾತು ಗೌಡ್ರೆ? ನಿಜವಾದ ಅಧಿಕಾರ ಇರೋದು ಎಲ್ಲಿ ಹೇಳಿ? ಅಧಿಕಾರಿಗಳ್ ಕೈಲಂತೂ ಇಲ್ಲ. ಇವ್ರ ನ್ನಾಳೋ ಪ್ರಭುಗಳ ಕೈಯಲ್ಲದೆ. ಇವ್ರು ಅವ್ರ ಕೈ ಗೊಂಬೆ ಆಗ್ಲೇ ಬೇಕು....ಅಂಥಾ ಪರಿಸರ ಸೃಷ್ಟಿಯಾಗಿದೆ ಗೌಡ್ರೆ.

'ಸಾರ್ವಜನಿಕರಾಸ್ತಿ ಲೂಟಿಕೋರ್‍ರನ್ನ ಸಮಾಜನೇ ಹಿಡ್ದು ಎಲ್ಲಿವರ್‍ಗೆ ತದ್ಕೋದಿಲ್ಲೊ, ಅಲ್ಲೀವರ್‍ಗೂ ಈ ಪುಂಡರ ಹಾವಳೀನಲ್ಲ ಜನ ಕಣ್ಮುಚ್ಚಿ ಸಹಿಸ್ಕೋಬೇಕು ನೋಡು.

ಈ ಮಾತು ನೂರಕ್ಕೆ ನೂರು ಸತ್ಯ ಗೌಡ್ರೆ. ಆದ್ರೆ ಏನ್ಮಾಡ್ತೀರಾ, ಸಮಯ ಸಂದು ಹೋದ ಮ್ಯಾಲೆ ಸತ್ಯದ ಮಾತ ನೆನೆಸ್ಕೋತಾರೆ ಜನ. ಕಾಡಿನ ಗಂದ ಹೋದ ಹೋದ ಮ್ಯಾಲೆ ಬಸಲಿಂಗಪ್ನೋರ ಭಾಷಣ ಕೇಳ್ದಂಗಾಗ್ತೈತೆ

ಹಾಗಂತ ಆ ಈರಪ್ಪನ್ ಏನಾದ್ನಲಾ ತಿಮ್ಮಾ ?

ಮಂತ್ರಿಮನೆ ಪಲಾವು, ಕಾಡಿನ ಜಿಂಕೆ ಮಾಂಸ ತಿನ್ತಾ ಇಬಹುದು ! ವಿಧಾನ ಸಭೇಲಿ ಗರ್ಜಿಸಿ ಮಾತಾಡಿದ ಮಂತ್ರಿಗಳು, ಶಾಸಕರು ಅನಂತರ ಈರಪ್ಪನ್ ಮುಂದೆ ಕೈಜೋಡಿಸಿರಬಹುದು !! ಎಲ್ಲರೂ ಕೈ ಮುಗಿದು ಹಣ್ಣು ಕಾಯಿ ನೀಡೋ ಗಜರಾಜನಿಗೆ ಹೊಡ್ದ ಗುಂಡು ಊರ್‍ನಲ್ಲಿರೋ ಮಂತ್ರಿಗಳ ಮನೆ ನಾಯಿಗೆ ಹೊಡ್ದಿದ್ರೆ ಎಂಥಾ ಪಂಡ ಮಂತ್ರಿ ಆಗಿದ್ರು ಸುಮ್ನಿರ್‍ತಿದ್ನಾ ಗೌಡ್ರೆ !?.... ಆಗ ಶುರು ಮಾಡ್ತಿದ್ರು ನೋಡಿ, ರಾಜ್ಯ, ಭಾಷೆ, ಜಾತಿ, ಹೀಗೆ ಒಂದಕ್ಕೊಂದು ಕೊಂಡಿ ಸೇರ್‍ಸಿ ಈರಪ್ಪನ್ ಕಾಲಿಗೆಸರಪಳಿ ವಿಧಾನಸೌಧದಿಂದ್ಲೇ ಬೀಳ್ತಾ ಇತ್ತು. ನಮಗಾಗೋ ನೋವೆ ಬೇರೆ—ಪರರಿಗಾಗೋ ನೋವೆ ಬೇರೆ. ಸಾರ್ವಜನಿಕರ ಆಸ್ತಿ ಕತೆ ಎಲ್ಲಾ ಇದೇ ಅಲ್ವಾ ಗೌಡ್ರೆ ?.... ಆದಿರ್ಲಿ.....ಈರಪ್ಪ ರಾಜ್ಯ ಕಳ್ಳ. ಇಲ್ಲಿರೋ ಈ ಮರಿ ಈರಪ್ಪನ್‌ಗಳಿಗೆ ಪಕ್ಷಭೇದ ಇಲ್ದೆ ರಕ್ಷಣೆ ಕೊಡೋ ರಾಜಕಾರಣಿಗಳಿಗೆ ಏನೇಳ್ತೀರಾ ?.... ವರ್‍ಸಗಟ್ಲೆಯಿಂದ ಒಂದು ಕಾರು ಶಿವಮೊಗ್ಗದಿಂದ ಎನ್ನಾಪ್ರುರದ ಸುತ್ತಮುತ್ತಕ್ಕೆಲ್ಲಾ ಸೆಕೆಂಡ್ಸ್ ತರೋದು.... ಈ ಕಡೆಯಿಂದಾ ಗಂದಾ ಸಾಗ್ಸೋದು ನಡೀತಾ ಇದ್ರು ರಾಜಕಾರಣಿಗಳ ರಕ್ಷಣೆಯಿಂದ ಇಲಾಖೆಯ್ರು ಇದನ್ನ ಮುಟ್ಟೋ ಸುದ್ದಿಗೆ ಹೋಗಿಲ್ಲ ಅಂದ್ರೆ ಪಕ್ಷ ಭೇದ ಎಲ್ಲೈತ್ತೇಳಿ ! ಹಳ್ಳೀರ ಪ್ರಶ್ನೆ ಇದು ಗೌಡ್ರೆ !?.

ಚೆಕ್ ಪೋಸ್ಟ್ ಆದಾವಲ್ಲ ಅವೇನು ಮಾಡ್ತಾವ್ಲೆ ತಿಮ್ಮಾ.... ?

ಹಗ್ಗ ಏರುಸ್ತವೆ, ಹಗ್ಗ ಇಳುಸ್ತವೆ. ಯಾವ್ದೇ ಒಂದು ದೊಡ್ಡ ಊರು ತಲ್ಪಬೇಕಾದ್ರೆ ಒಂದಾದ್ರೂ ಚೆಕ್ ಪೋಸ್ಟ್ ದಾಟಿಯೇ ಹೋಗಬೇಕು. ಹೀಗಿದ್ದೂ "ನಮ್ಮ ಚೆಕ್ ಪೋಸ್ಟಲ್ಲಿ ಹೋಗ್ಲಿಲ್ಲ".... ನಮ್ಮ ಚೆಕ್ ಪೋಸ್ಟಲ್ಲಿ ಹೋಗ್ಲಿಲ್ಲ ಅಂದ್ರೆ, ಹೆಲಿಕಾಪ್ಟರ್‌ನಲ್ಲಿ ಸಾಗಸ್ತಾ ಇದಾರಾ ಗೌಡ್ರೆ? ಚೆಕ್ ಪೋಸ್ಟಲ್ಲಿ ಕಳ್ಳ ಮಾಲು ಹೋಗ್ತಾ ಇಲ್ಲಾ ಅಂದ್ರೆ, ಈ

(3ನೇ ಪುಟಕ್ಕೆ)

# 'ಗಳಗಂಡ' ರೋಗ: ಹಾಗೆಂದರೇನು? ಅದಕ್ಕೆ ಪರಿಹಾರವೇನು?

ಅಲ್ಪ ಪ್ರಮಾಣದ 'ಅಯೋಡಿನ್' ಆರೋಗ್ಯ ಮತ್ತು ಕಾಯಿಲೆಯ ಮಧ್ಯೆ ಮಹತ್ವದ ಪಾತ್ರ ವಹಿಸುತ್ತದೆ! ನಮ್ಮ ದೇಹಕ್ಕೆ ಪ್ರತಿನಿತ್ಯ 50 ರಿಂದ 70 'ಮೈಕ್ರೋಗ್ರಾಂ'ಗಳಷ್ಟು ಅಯೋಡಿನ್ ಬೇಕಾಗುತ್ತದೆ. ಅಯೋಡಿನ್ ಮಣ್ಣಿನಲ್ಲಿರುತ್ತದೆ. ಅದು ನೀರು ಮತ್ತು ಸಸ್ಯಗಳಲ್ಲಿ ಸೇರಿ, ಆಹಾರದಲ್ಲಿ ಮಿಶ್ರಿತವಾಗಿರುತ್ತದೆ. ಆದರೆ ಗುಡ್ಡಗಾಡು ಪ್ರದೇಶಗಳಲ್ಲಿ, ಗುಡ್ಡದ ತಪ್ಪಲುಗಳಲ್ಲಿ ಮತ್ತು ಕೆಲವೊಮ್ಮೆ ಮೈದಾನ ಪ್ರದೇಶದಲ್ಲಿಯೂ ಸಹ. ಅಲ್ಲಿಯ ಮಣ್ಣು ಅಯೋಡಿನ್ ಯುಕ್ತವಾಗಿರುವುದಿಲ್ಲ. ಮಣ್ಣಿನ ಸಮೇತ ಮಣ್ಣಿನ ಅಯೋಡಿನನ್ನು ಕೊಚ್ಚಿ ಹಾಕಬಹುದು. ಅಯೋಡಿನ್ ಕೊರತೆ ಆದಾಗ ನಮಗೆ ಅಯೋಡಿನ್ ಕೊರತೆಯ ಕಾಯಿಲೆಗಳು ಬರಬಹುದು.

ಈಗ ಅಯೋಡಿನ್‌ನ ಕಾರ್ಯವೇನು? ಎಂಬುದನ್ನು ತಿಳಿದುಕೊಳ್ಳೋಣ. ನಮ್ಮ ಕುತ್ತಿಗೆಯಲ್ಲಿ, ಗಂಟಲಿನ ಭಾಗದಲ್ಲಿ 'ಥೈರಾಯಿಡ್' ಎಂಬ ಗ್ರಂಥಿ ಇದೆ ಅದರಲ್ಲಿ ನಮ್ಮ ದೇಹಕ್ಕೆ ಬೇಕಾದ ಥೈರಾಕ್ಸಿನ್ ಹಾಗೂ ಟ್ರೈ-ಅಯಡೋ ಥೈರೋನೈನ್ ಹಾರ್ಮೋನ್‌ಗಳು ಉತ್ಪಾದಿಸಲ್ಪಡುತ್ತವೆ. ಈ ಹಾರ್ಮೋನ್‌ಗಳ ಉತ್ಪಾದನೆಗೆ ಅಯೋಡಿನ್ ಬಹಳ ಮುಖ್ಯವಾದದ್ದು. ಈ ಹಾರ್ಮೋನ್‌ಗಳು ದೇಹದ ಬೆಳವಣಿಗೆ ಮತ್ತು ವಿಕಸನದಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಮಿದುಳಿನ ಬೆಳವಣಿಗೆ-ಮುಖ್ಯವಾಗಿ ಮೊದಲನೆಯ ಹಂತದಲ್ಲಿ; ಗರ್ಭಸ್ಥ ಮಗುವಾಗಿದ್ದಾಗ, ಥೈರಾಯ್ಡ್ ಹಾರ್ಮೋನ್‌ಗಳ ಅವಶ್ಯಕತೆ ತುಂಬಾ ಇರುತ್ತದೆ (ಮತ್ತು ಪಿಷ್ಟ, ಪ್ರೋಟೀನ್, ಕೊಬ್ಬು ಇವುಗಳ ಸಂಕೀರ್ಣ ಕ್ರಿಯೆಗಳ ನಿಯಂತ್ರಣದಲ್ಲಿಯೂ ಕೂಡ.)

ಅಯೋಡಿನ್ ಕೊರತೆಯಾದಲ್ಲಿ, ಮೇಲೆ ಹೇಳಿದ ಹಾರ್ಮೋನ್‌ಗಳು ಸಾಕಷ್ಟು ಪ್ರಮಾಣದಲ್ಲಿ ಥೈರಾಯಿಡ್ ಗ್ರಂಥಿಯಲ್ಲಿ ಉತ್ಪತ್ತಿಯಾಗುವುದಿಲ್ಲ. ಅದನ್ನು ಉತ್ಪಾದಿಸುವ ಯತ್ನದಲ್ಲಿ ಆ ಗ್ರಂಥಿ ಊದಬಹುದು. ಇದನ್ನು 'ಗಳಗಂಡ' ಅಥವಾ 'ಗಾಯಿಟರ್' ರೋಗ ಎನ್ನುತ್ತಾರೆ.

ಈ ಹಾರ್ಮೋನ್‌ಗಳ ಉತ್ಪಾದನೆ ಆಗದಿದ್ದ ಪಕ್ಷದಲ್ಲಿ ದೇಹದ ಚಟುವಟಿಕೆಗಳು ಕಡಿಮೆ ಮತ್ತು ನಿಧಾನವಾಗುತ್ತವೆ. ಮಕ್ಕಳಲ್ಲಾದರೆ ದೈಹಿಕ ಮತ್ತು ಮಾನಸಿಕ ಬೆಳವಣಿಗೆ ಕುಂಠಿತವಾಗುತ್ತದೆ. 'ಕ್ರೆಟಿನಿಸಮ್' ಎಂಬ ಕುಂಠಿತ ಬೆಳವಣಿಗೆಯ ಕಾಯಿಲೆ ಪ್ರಾರಂಭವಾಗುತ್ತದೆ. ಶಾಶ್ವತ ಬುದ್ಧಿ ಮಾಂದ್ಯ ಮತ್ತು ದೈಹಿಕ ಕ್ರಿಯೆಗಳಲ್ಲಿ ವ್ಯತ್ಯಾಸ ಉಂಟಾಗಲೂಬಹುದು. ಇದರಿಂದ ಮಾನವ ಶಕ್ತಿಯ ವ್ಯಯ ಎಷ್ಟಾಗುತ್ತಿದೆ ಗೊತ್ತೆ? ಸುಮಾರು 8 ಕೋಟಿ ಜನ ಭಾರತೀಯರು ಒಂದಲ್ಲ ಒಂದು ಅಯೋಡಿನ್ ಕೊರತೆಯ ಕಾಯಿಲೆಯಿಂದ ನರಳುತ್ತಿದ್ದಾರೆ! ಇದರಲ್ಲಿ ನಮ್ಮ ಮಲೆನಾಡೂ ಸೇರಿದೆ.

ಹಾಗಾದರೆ ಈ ಕಾಯಿಲೆಯನ್ನು ತಡೆಗಟ್ಟುವುದಾದರೂ ಹೇಗೆ? ಬಹಳ ಸುಲಭ. ಅಯೋಡಿನ್‌ಯುಕ್ತ ಉಪ್ಪನ್ನು (ಅಯೋಡೈಸ್ಡ್ ಸಾಲ್ಟ್) ಉಪಯೋಗಿಸುವುದರಿಂದ ಸಾಧ್ಯ. ಸದ್ಯಕ್ಕೆ ಅಯೋಡಿನ್‌ಯುಕ್ತ ಉಪ್ಪು ಅಂಗಡಿಗಳಲ್ಲಿ ದೊರಕುತ್ತದೆ. ಇನ್ನು ಮುಂದೆ ಸರಕಾರವೇ ಅಯೋಡಿನ್ ಅನ್ನು ಉಪ್ಪಿಗೆ ಬೆರೆಸಿ ಮಾರುಕಟ್ಟೆಗೆ ಬಿಡುಗಡೆ ಮಾಡಲಿದೆ.

ಮಾನವ ಶಕ್ತಿಯ ವ್ಯಯವನ್ನು ತಡೆಗಟ್ಟುವ ಸುಲಭ ವಿಧಾನವನ್ನು ನೀವೂ ಅನುಸರಿಸಿ, ನಿಮ್ಮ ಸುತ್ತಮುತ್ತಲಿನ ಸಮಾಜ ಬಾಂಧವರಿಗೂ ತಿಳಿಸುವಿರಷ್ಟೆ?

— ಡಾ|| ಸಂ ರಾ. ಕೋದಂಡರಾವ್,
ಉತ್ತರೇಶ್ವರ

## ಕಾಡಲ್ಲಿ ಗಂಧ ಇಲ್ಲ, ಊರಲ್ಲಿ.....

(2ನೇ ಪುಟದಿಂದ)

ಚೆಕ್ ಪೋಸ್ಟ್ ಯಾಕ್ಬೇಕು? ಬರೀ ಹೆಗ್ಗ ಎಳ್ದು-ಇಳ್ಸಿ ಮಾಡಾಕಾ? ಕಳ್ಳರನ್ನ ಹಿಡ್ಯಾಕೆ ಆಗ್ದೆ ಇದ್ರೆ ಸರ್ಕಾರದ ಹಣ ಅದ್ರು ಉಳೀಲಿ....ಈ ಗೇಟುಗಳು ಇರೋದ್ರಿಂದ ಇಲಾಖೆಗೆ ಆದಾಯ ಎಷ್ಟು, ಈ ಗೇಟಿನ ರಖಾಲಿ ಖರ್ಚೆಷ್ಟು ಅನ್ನೋದ್ನ ಇಲಾಖೇರು ಬಹಿರಂಗ ಪಡಿಸಿದ್ರೆ, ಸಾರ್ವಜನಿಕರಿಗೆ ಸಮಾಧಾನಕ್ಕಿಂತ ಮೋಜೇ ,ಜಾಸ್ತಿ ಅನ್ನಬಹುದು .... ನಡೀರಿ ಗೌಡ್ರೆ! ನಡೀಲಿ ಕಳ್ಳ ಕಾಕರ ದರ್ಬಾರು. ಕಾಡಿನ ಬೀಟಿ ಹೋಯ್ತು, ಸಾಗವಾನಿ ಹೋಯ್ತು, ಗಂಧ ಬೇರು ಸಮೇತ ಇಲ್ಲಾಯ್ತು, ಈಗ ಬಡೋರ ಹುಡ್ಗೀರು ಬೀದಿ ಪಾಲಾಗೋಕೆ ಶುರುವಾಯ್ತು....ಇನ್ನೇನು ಬರ್‍ತದೆ ಪೇಪರ್ ನೋಡ್ತಾ ಇರಿ....

● 'ಮೂಡ್ಬಾಗ್ಲು ಮೂಡಾಕ್ತ'

## ಕಾಫಿ ಗುಂಡು ರಂಧ್ರ ಕೊರಕಕ್ಕೆ ಚಿಕಿತ್ಸೆ

ಮಳೆಗಾಲದ ಪ್ರಾರಂಭದೊಂದಿಗೆ ವಾತಾವರಣದಲ್ಲಿನ ಶೈತ್ಯಾಂಶ ಹೆಚ್ಚುತ್ತಿದ್ದು, ಈ ಹವಾಮಾನವು ಕಾಫಿ ತೋಟಗಳಲ್ಲಿ, ವಿಶೇಷವಾಗಿ ರೋಬಸ್ಟಾ ತೋಟಗಳಲ್ಲಿ. 'ಗುಂಡು ರಂಧ್ರ ಕೊರಕ' (ಶಾಟ್ ಹೋಲ್ ಬೋರರ್) ಹಬ್ಬಲು ಅನುಕೂಲಕರವಾಗಿದೆ. ವಾತಾವರಣದಲ್ಲಿನ ಶೈತ್ಯಾಂಶ ಉಷ್ಣತೆಗನುಗುಣವಾಗಿ ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಈ ಕೀಟದ ಹಾವಳಿ ಹೆಚ್ಚಾಗುವ ಸಾಧ್ಯತೆ ಇದೆ ಈ ಕೀಟವು 25-30 ದಿನಗಳ ಕಾಲಾವಧಿಯಲ್ಲಿ ತನ್ನ ಒಂದೊಂದು ತಲೆಮಾರನ್ನು ಪೂರೈಸಿ, ಕಾಫಿ ಗಿಡಗಳಲ್ಲಿ ಹೊಸ ಹೊಸ ರೆಕ್ಕೆಗಳಿಗೆ ವ್ಯಾಪಿಸುವ ಶಕ್ತಿ ಪಡೆದಿದೆ.

ಈ ಕೀಟವು ಹಾನಿಕಾರಕ ಪ್ರಮಾಣದಲ್ಲಿ ಹಬ್ಬದಂತೆ ತಡೆಯಲು ಈ ಕೆಳಕಂಡ ಹತೋಟಿ ವಿಧಾನಗಳನ್ನು ಅನುಸರಿಸಲು ಸೂಚಿಸಲಾಗಿದೆ : 1) ತೋಟಗಳಲ್ಲಿ ಶೈತ್ಯಾಂಶ ಹೆಚ್ಚಾಗದಂತೆ ನೋಡಿಕೊಳ್ಳಲು, ಗಾಳಿ, ಬೆಳಕು ಚೆನ್ನಾಗಿ ಬೀಳುವಂತೆ, ನೆರಳನ್ನು ದಟ್ಟವಾಗಿರುವ ಕಡೆಗಳಲ್ಲಿ ತೆಳು ಮಾಡಬೇಕು. 2) ಜೂನ್ ತಿಂಗಳಿನಿಂದ ಅಕ್ಟೋಬರ್‌ವರೆಗಿನ ಅವಧಿಯಲ್ಲಿ ತಿಂಗಳಿಗೊಂದು ಬಾರಿಯಂತೆ ಕೀಟ ಪೀಡಿತ ರೆಕ್ಕೆಗಳನ್ನು ಹುಡುಕಿಸಿ ಕಿತ್ತು ಸುಡಬೇಕು. 3) ಕೀಟದ ಹಾವಳಿ ಉಲ್ಬಣಗೊಂಡ ಸಂದರ್ಭದಲ್ಲಿ ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ನೀರಿನಲ್ಲಿ ಕರಗುವ ಶೇ. 50ರ ಬಿ. ಎಚ್. ಸಿ. ಪುಡಿಯನ್ನು 200 ಲೀಟರ್ ನೀರಿಗೆ 2 ಕಿಲೋದಂತೆ ಬೆರೆಸಿ, ಪ್ರತಿ ಎಕರೆಗೆ ಒಂದು ಬ್ಯಾರಲ್‌ನಂತೆ ಯಾಂತ್ರೀಕೃತ ಮಿಸ್ಟ್‌ಬ್ಲೋಯರ್ ನಿಂದ ಸಿಂಪಡಿಸಬೇಕು.

ಗಿಡಗಳಿಗೆ ಹೆಚ್ಚು ಗೊಬ್ಬರ ನೀಡುವುದರಿಂದ ರೆಂಬೆಗಳ ಬೆಳವಣಿಗೆಯ ಕ್ಷಿಪ್ರಗತಿಯನ್ನು ಕಾಪಾಡಿಕೊಳ್ಳಬಹುದು. ಪೊಟ್ಯಾಷ್ ಗೊಬ್ಬರವನ್ನು ಹೆಚ್ಚಾಗಿ ನೀಡಿದಲ್ಲಿ ರೆಕ್ಕೆಗಳು ಬೇಗ ಬಲಿತು ಕೀಟದ ಹಾವಳಿಯನ್ನು ತಡೆಯಲು ಶಕ್ತವಾಗುತ್ತವೆ.

(ಪ್ರಕಟಣೆ: ಉಪ ನಿರ್ದೇಶಕರು (ವಿಸ್ತರಣೆ) ಕಾಫಿ ಮಂಡಳಿ.)

### 'ಅಕಾಲಿಕ ಮಳೆಯಿಂದ ಭತ್ತದ ಬೆಳೆಗೆ ನಷ್ಟ' :

## ಸ| ಕೃಷಿ ನಿರ್ದೇಶಕರ ಪ್ರತಿಕ್ರಿಯೆ

ಕೊಪ್ಪ : ಈ ತಾಲ್ಲೂಕಿನಲ್ಲಿ ಈ ವರ್ಷ 436 ಹೆಕ್ಟೇರ್ ವಿಸ್ತೀರ್ಣದಲ್ಲಿ ಬೇಸಿಗೆ ಭತ್ತ ಬೆಳೆಯಲಾಗಿದ್ದು, ಆ ಪೈಕಿ ಶೇ. 80 ರಷ್ಟು ಫಸಲು ಮೇ 20ಕ್ಕೆ ಮೊದಲೇ ಕಟಾವಾಗಿತ್ತೆಂದು ಸಹಾಯಕ ಕೃಷಿ ನಿರ್ದೇಶಕ ಶ್ರೀನಿವಾಸಯ್ಯ ಹೇಳಿಕೆ ನೀಡಿದ್ದಾರೆ.

17.6.90ರ 'ಮುಂಜಾವು'ನಲ್ಲಿ ಪ್ರಕಟವಾಗಿರುವ ರಾಮಸ್ವಾಮಿ ಮತ್ತು ಧರ್ಮೇಗೌಡರ ಪತ್ರಗಳಿಗೆ ಪ್ರತಿಕ್ರಿಯಿಸಿರುವ ಅವರು, ಮೇ 21 ರಿಂದ ಮಳೆ ಆರಂಭವಾಗಿದ್ದು, ಅನಂತರದ ಅವಧಿಯಲ್ಲಿ 115.75 ಹೆಕ್ಟೇರ್‌ನ ಬೆಳೆ ಕಟಾವಿಗೆ ಬಾಕಿ ಇತ್ತೆಂದೂ, ಜೂನ್ 5 ರಿಂದ 9 ರ ವರೆಗೆ ಮಳೆ ಬಿಡುವು ಕೊಟ್ಟಿದ್ದು, 37.15 ಹೆಕ್ಟೇರ್ ಬೆಳೆ ಅನಂತರವೂ ಕಟಾವಿಗೆ ಉಳಿದು ಹೆಚ್ಚು ನಷ್ಟಕ್ಕೀಡಾಗಿದೆ ಎಂದಿದ್ದಾರೆ.

ಹಿಂದಿನ 59 ವರ್ಷಗಳ ಮಳೆ ಅಂಕಿ-ಅಂಶಗಳ ಪ್ರಕಾರ, ಶೇ. 50 ರಷ್ಟು ವರ್ಷಗಳಲ್ಲಿ ತಾ|| ನಲ್ಲಿ ಮೇ 20 ರಿಂದಲೇ ಮಳೆ ಬಿದ್ದಿದ್ದು, ಈ ವರ್ಷದ್ದು ಅಕಾಲಿಕ ಮಳೆ ಎನ್ನಲಾಗದು. ಅದ್ದರಿಂದ ರೈತರು ಮೇ 3ನೇ ವಾರದೊಳಗೇ ಕಟಾವಿಗೆ ಬರುವಂಥ ಅಲ್ಪಾವಧಿ, ಮಧ್ಯಮಾವಧಿ ತಳಿಗಳನ್ನೇ ಬೆಳೆಸಬೇಕೆಂದಿದ್ದಾರೆ. ಈ ವರ್ಷದ ನಷ್ಟದ ಬಗ್ಗೆ ನಿಖರವಾದ ಸಮೀಕ್ಷೆ ನಡೆಯುತ್ತಿರುವುದಾಗಿ ತಿಳಿಸಿದ್ದಾರೆ

### ಕಡೂರಿಗೆ ವರ್ಗವಾಗಿರುವ ಶಾಖಾಧಿಕಾರಿ ರಾಮಚಂದ್ರರಾವ್‌ಗೆ ನಾಗರಿಕ ವಿದಾಯ

## ಕೊಪ್ಪ ಜೀವವಿಮಾ ಶಾಖೆಯ ಪ್ರಗತಿ: ಪ್ರತಿನಿಧಿಗಳ ಸಂತಸ

ಕೊಪ್ಪದ ಜೀವವಿಮಾ ಶಾಖೆಯ ಪ್ರತಿನಿಧಿಗಳ ಸಭೆಯು ಜುಲೈ 2 ರಂದು ಸಂಘದ ಅಧ್ಯಕ್ಷ ಎಸ್. ಜಿ. ಕೃಷ್ಣಮೂರ್ತಿಯವರ ಅಧ್ಯಕ್ಷತೆಯಲ್ಲಿ ನಡೆದು, ಶಾಖೆಯ ವ್ಯವಹಾರದ ಪ್ರಗತಿಯ ಬಗ್ಗೆ ತೃಪ್ತಿ, ಸಂತಸ ವ್ಯಕ್ತಪಡಿಸಿದೆ.

ಪ್ರತಿನಿಧಿಗಳಿಗೆ ಶಾಖೆಯಿಂದ ದೊರೆಯಬೇಕಾದ ಸವಲತ್ತುಗಳನ್ನು ಒದಗಿಸಲು ಹಾಗೂ ಅವರ ಅಹವಾಲುಗಳನ್ನು ಸೌಜನ್ಯದಿಂದ ಸ್ವೀಕರಿಸಲು ಅಧಿಕಾರಿಗಳನ್ನು ಕೋರಲು ತೀರ್ಮಾನಿಸಲಾಯಿತು.

'ಪ್ರಸ್ತುತ ಆರ್ಥಿಕ ವರ್ಷದಲ್ಲಿ ಉತ್ತಮ ವ್ಯವಹಾರ ನಡೆಸಿ ಶಾಖೆಯನ್ನು ಪ್ರಗತಿ ಪಥದತ್ತ ನಡೆಸಲು ಪ್ರತಿಯೊಬ್ಬರೂ ಶ್ರಮಿಸೋಣ" ಎಂದು ಕರೆ ನೀಡಿದ ಅಧ್ಯಕ್ಷರು, ಶಾಖಾ ಕಛೇರಿ ಹೊರಡಿಸಿರುವ 'ವಿಮಾ ಶೃಂಗ' ಮಾಸಿಕ ಪತ್ರಿಕವನ್ನು ಲೋಕಾರ್ಪಿಸಿ ಶಾಖೆಯ ಪ್ರಗತಿಯ ಹಿನ್ನೋಟವನ್ನು ವಿವರಿಸಿದರು.

**ಪ್ರಗತಿಯ ಸಿಂಹಾವಲೋಕನ**

1987ರವರೆಗೆ ಚಿಕ್ಕಮಗಳೂರು ಜೀವವಿಮಾ ಕಛೇರಿ ವ್ಯಾಪ್ತಿಗೆ ಒಳಪಟ್ಟಿದ್ದ, ಕೊಪ್ಪ, ಶೃಂಗೇರಿ, ನರಸಿಂಹರಾಜಪುರ ತಾಲ್ಲೂಕುಗಳನ್ನೊಳಗೊಂಡ ಕೊಪ್ಪ ಶಾಖೆಯು ವ್ಯಾಪ್ತಿಯಲ್ಲಿ, ಶಾಖೆ ಪ್ರಾರಂಭಗೊಳ್ಳುವ ಸಮಯದಲ್ಲಿ 3 ಕೋಟಿ 31 ಲಕ್ಷ ರೂ. ಗಳ ವ್ಯವಹಾರ ನಡೆಯುತ್ತಿತ್ತು.

ಆಗ್ಗೆ ಅಭಿವೃದ್ಧಿ ಅಧಿಕಾರಿಗಳಾಗಿ ಜನಾನುರಾಗಿಗಳಾಗಿದ್ದ ಕೆ. ಎನ್. ಅನಂತರಾಮಯ್ಯ ಮತ್ತು ಟಿ. ಆರ್. ಆಚಾರ್ಯ ಇವರುಗಳು ಶಾಖೆ ಪ್ರಾರಂಭಗೊಳ್ಳುವ ಸಮಯದಲ್ಲೇ ಬಡ್ತಿಯ ಮೇಲೆ ಬೇರೆಡೆಗೆ ವರ್ಗವಾದರು. ದಾವಣಗೆರೆಯಲ್ಲಿ ಉಪ ಶಾಖಾಧಿಕಾರಿಯಾಗಿದ್ದು, 1987 ರ ಸೆಪ್ಟೆಂಬರ್ 8 ರಂದು ಅಧಿಕೃತವಾಗಿ ಕೊಪ್ಪದ ನೂತನ ಶಾಖೆಯ ಜವಾಬ್ದಾರಿ ವಹಿಸಿಕೊಂಡ ಎಂ ರಾಮಚಂದ್ರರಾವ್ ರವರ ನೇತೃತ್ವದಲ್ಲಿ, ನೂತನ ಅಭಿವೃದ್ಧಿ ಅಧಿಕಾರಿಗಳಾಗಿ ಬಂದ ಕೆ. ಸಿ. ಪಂಡಿತ್, ಎಚ್. ರಾಧಾಕೃಷ್ಣ ಭಟ್ ಹಾಗೂ ಪ್ರತಿನಿಧಿಗಳ ಪ್ರಯತ್ನದಿಂದ, ಮೊದಲ ವರ್ಷದಲ್ಲೇ ಶಾಖೆ ತನ್ನ ಗುರಿಯಾದ 4 ಕೋಟಿ ವ್ಯವಹಾರದ ಅಂಚಿನಲ್ಲಿ ಸಾಗಿ 3 ಕೋಟಿ 90 ಲಕ್ಷ ರೂ ಗಳ ವ್ಯವಹಾರ ನಡೆಸಿದ್ದು ಪ್ರಶಂಸನೀಯ ಎಂದು ಕೃಷ್ಣಮೂರ್ತಿ ಹೇಳಿದರು.

1988-89ನೇ ಸಾಲಿನಲ್ಲಿ 7 ಕೋಟಿ 34 ಲಕ್ಷ ರೂ. ಗಳ ಹೊಸ ವ್ಯವಹಾರ ನಡೆಸಿ ಉಡುಪಿ ವಿಭಾಗದಲ್ಲಿ ಶೇಕಡಾವಾರು ಪ್ರಗತಿಯಲ್ಲಿ ಪ್ರಥಮ ಸ್ಥಾನ ಗಳಿಸಿದ ಶಾಖೆ, ಈ ಪ್ರಗತಿಯನ್ನು 1989-90 ರಲ್ಲೂ ಮುಂದುವರಿಸಿಕೊಂಡು, 8 ಕೋಟಿ 3 ಲಕ್ಷ ರೂ. ಗಳ ಹೊಸ ವ್ಯವಹಾರ ನಡೆಸಿದೆ.

(4ನೇ ಪುಟಕ್ಕೆ)

## ತೀರ್ಥಹಳ್ಳಿ ಪಾಲಿಟೆಕ್ನಿಕ್ : ಡಿಪ್ಲೊಮಾಕ್ಕೆ ಕಾಲಾವಕಾಶ

ತೀರ್ಥಹಳ್ಳಿ : 1985-86ರಲ್ಲಿ ಆರಂಭವಾಗಿರುವ ಇಲ್ಲಿನ ಸಹ್ಯಾದ್ರಿ ಪಾಲಿಟೆಕ್ನಿಕ್‌ನಿಂದ ಈಗಾಗಲೇ 2 ಬ್ಯಾಚ್ ವಿದ್ಯಾರ್ಥಿಗಳು ಡಿಪ್ಲೊಮಾ ಶಿಕ್ಷಣವನ್ನು ಪೂರೈಸಿದ್ದು, ಉತ್ತಮ ಉದ್ಯೋಗ ಪಡೆದಿದ್ದಾರೆ. ಡಿಪ್ಲೊಮಾಕ್ಕೆ ಸೇರಲು ಕನಿಷ್ಠ ವಿದ್ಯಾರ್ಹತೆ ಎಸ್. ಎಸ್. ಎಲ್. ಸಿ. ಪಾಸ್ ಇದ್ದು, ಗಣಿತ ಮತ್ತು ವಿಜ್ಞಾನ ವಿಷಯಗಳಲ್ಲಿ ಕನಿಷ್ಠ ಶೇಕಡ 45 ಅಂಕ ಗಳಿಸಿರಬೇಕು. ಪಿ. ಯು. ಸಿ. ಮತ್ತು ಪದವಿ ವಿದ್ಯಾರ್ಹತೆಯುಳ್ಳವರಿಗೂ ಪ್ರವೇಶಕ್ಕೆ ಅವಕಾಶವಿದೆ. 1990-91 ನೇ ಸಾಲಿಗೆ ಪ್ರವೇಶ ಪಡೆಯಲು ಇನ್ನೂ ಕಾಲಾವಕಾಶವಿರುವುದಾಗಿ ಪ್ರಿನ್ಸಿಪಾಲ್ ತಿಳಿಸಿದ್ದಾರೆ.

## ಯಕ್ಷಗಾನ ತರಬೇತಿ

ಹರಿಹರಪುರ : ಇಲ್ಲಿನ ಮಲೆನಾಡು ಯಕ್ಷಗಾನ ಕಲಾ ಶಿಕ್ಷಣ ಕೇಂದ್ರದಲ್ಲಿ 1990ನೇ ಸಾಲಿನ ಪಾಠವನ್ನು ಆಗಸ್ಟ್ 5 ರಂದು ಹರಿಹರಪುರದಲ್ಲಿ ಪ್ರಾರಂಭಿಸಲಾಗುತ್ತದೆ. ಯಕ್ಷಗಾನ ತರಬೇತಿಗೆ ಸೇರಬಯಸುವವರು 25-7-90 ರ ಒಳಗೆ ಪ್ರವೇಶ ಪತ್ರವನ್ನು ಸಲ್ಲಿಸಬೇಕು. ಪ್ರವೇಶ ಪತ್ರಗಳನ್ನು ಶಿವರಾಮ ಸೇರಿಗಾರ್, ಬಸ್ ಸ್ಟ್ಯಾಂಡ್ ಅಂಗಡಿ, ಹರಿಹರಪುರ ಇವರಿಂದ ಪಡೆದುಕೊಳ್ಳಬೇಕಾಗಿ ಕಾರ್ಯದರ್ಶಿ ಟಿ. ಎಸ್. ಶ್ರೀಕಂಠ ಕೋರಿದ್ದಾರೆ.

# ಅಧ್ಯಾಪಕ ವೃಂದಕ್ಕೆ ಗೌರವಾರ್ಪಣೆ ಮತ್ತು ಶಾಲಾ ವಿದ್ಯಾರ್ಥಿ ಸಂಘದ ಉದ್ಘಾಟನೆ

ನಾರ್ವೆ : ಕಳೆದ ಸಾಲಿನ ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಶೇ 95 ಫಲಿತಾಂಶ ಪಡೆದ ಇಲ್ಲಿನ ಸ್ವಯಂಪ್ರಕಾಶ ಸರಸ್ವತಿ ಪ್ರೌಢಶಾಲೆಯ ಬೋಧಕ ಹಾಗೂ ಬೋಧಕೇತರ ವೃಂದವನ್ನು ಆಡಳಿತ ಮಂಡಳಿಯ ವತಿಯಿಂದ ಹರಿಹರಪುರ ಮಠಾಧೀಶರ ಅಧ್ಯಕ್ಷತೆಯಲ್ಲಿ ನೆನಪಿನ ಕಾಣಿಕೆಯನ್ನು ನೀಡಿ ಗೌರವಿಸಲಾಯಿತು.

ವಿದ್ಯಾಸಂಸ್ಥೆಯ ಕಾರ್ಯಾಧ್ಯಕ್ಷರಾದ ಕೆ. ಎಸ್. ಕಾಡಪ್ಪಗೌಡ ಜ್ಯೋತಿ ಬೆಳಗಿಸಿ ವಿದ್ಯಾರ್ಥಿ-ಸಂಘವನ್ನು ಉದ್ಘಾಟಿಸಿದರು. ಶಾಲೆಗೆ ಧ್ವಜಸ್ತಂಭವನ್ನು ನಿರ್ಮಿಸಿಕೊಟ್ಟ ಮಂಡಲ ಉಪಪ್ರಧಾನರೂ, ವಿದ್ಯಾಸಂಸ್ಥೆಯ ಉಪಾಧ್ಯಕ್ಷರೂ ಆದ ಎಂ. ಆರ್. ಜಯಪ್ರಕಾಶ್‌ರವರಿಗೂ ನೆನಪಿನ ಕಾಣಿಕೆ ನೀಡಿ ಗೌರವಿಸಲಾಯಿತು.

ಸಭೆಯಲ್ಲಿ ಆನಂದರಾಮ ಭಟ್, ಜೆ. ಪಿ. ನೀಲಕಂಠ ಭಟ್ ಮತ್ತು ಎ. ಎಸ್. ರಾಘವೇಂದ್ರ ರಾವ್ ಮಾತನಾಡಿದರು. ಸನ್ಮಾನಿತರ ಪರವಾಗಿ ಮುಖ್ಯೋಪಾಧ್ಯಾಯರಾದ ಎಚ್. ಕೆ. ಯೋಗಪ್ಪ ಮಾತನಾಡಿದರು.

ಅಧ್ಯಕ್ಷರು "ಜ್ಞಾನಾರ್ಜನೆಗೆ ವಿದ್ಯೆ ಅಗತ್ಯ. ವಿದ್ಯಾರ್ಜನೆಗೆ ಶ್ರಮ ಅಗತ್ಯ" ಎಂದು ತಿಳಿಸಿ, ಎಲ್ಲರೂ ವಿದ್ಯಾವಂತರಾಗಬೇಕೆಂದು ಕರೆ ನೀಡಿದರು. ಹೊಸದಾಗಿ ಕಟ್ಟಿಸಲಿರುವ ಶಾಲಾ ಕೊಠಡಿಗೆ ಸ್ವಾಮೀಜಿ 2 ಸಾವಿರ ರೂ.ಗಳನ್ನು ಸ್ಥಳದಲ್ಲೇ ದೇಣಿಗೆ ನೀಡಿದರು.

ಇದೇ ಸಂದರ್ಭದಲ್ಲಿ ಕೆ.ಎಂ. ರಾಮಚಂದ್ರ ಮತ್ತು ಡಾ|| ಕೆ ಎಂ. ಬಾಲಕೃಷ್ಣರವರು ತಮ್ಮ ತಂದೆ ದಿ|| ಕಾಗಲಗೋಡು ಮಂಜುನಾಥಯ್ಯನವರ ಸ್ಮರಣಾರ್ಥ ಶಾಲೆಗೆ ಒಂದು ಕೊಠಡಿಯನ್ನು ಕಟ್ಟಿಸಿಕೊಡುವ ವಾಗ್ದಾನ ಮಾಡಿದರು.

ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಎಸ್. ಎಸ್. ನಾಗೇಂದ್ರ ಭಟ್ ಸ್ವಾಗತಿಸಿ, ಕಾರ್ಯಕ್ರಮ ನಿರ್ವಹಿಸಿ ವಂದಿಸಿದರು.

## ಅಕ್ಕಿ ಉತ್ಪಾದನೆ ವಿಚಾರ ಸಂಕಿರಣ

ಹಾಲ್ಮುತ್ತೂರು : ವಿಶೇಷ ಆಹಾರ (ಅಕ್ಕಿ) ಉತ್ಪಾದನಾ ಯೋಜನೆಯಡಿ ಜು. 17 ಮಂಗಳವಾರ ಬೆಳಗ್ಗೆ 10-30ಕ್ಕೆ ಇಲ್ಲಿನ ಮಾಧ್ಯಮಿಕ ಶಾಲಾ ಆವರಣದಲ್ಲಿ ವಿಚಾರ ಸಂಕಿರಣ ಮತ್ತು ಭತ್ತದ ಸಸಿ ನಾಟಿ ಮತ್ತು ಇತರ ಬೇಸಾಯ ಪದ್ಧತಿಗಳ ಬಗ್ಗೆ ವಿಜ್ಞಾನಿಗಳಿಂದ ತರಬೇತಿ ಕಾರ್ಯಕ್ರಮ ನಡೆಯಲಿದೆ. ಸುತ್ತಮುತ್ತಲ ಗ್ರಾಮಗಳ ರೈತರು ಪ್ರಯೋಜನ ಪಡೆದುಕೊಳ್ಳಲು ಕೋರಲಾಗಿದೆ.

# ಸೀರತ್ ಸಪ್ತಾಹ : ಪ್ರಬಂಧ ಸ್ಪರ್ಧೆ

ಸ್ಟೂಡೆಂಟ್ಸ್ ಇಸ್ಲಾಮಿಕ್ ಆರ್ಗನೈಝೇಶನ್ ಆಫ್ ಇಂಡಿಯಾ (ಎಸ್.ಐ.ಒ.) 1990 ರ ಅಕ್ಟೋಬರ್ 1 ರಿಂದ 7ರವರೆಗೆ ನಡೆಸಲಿರುವ 'ಸೀರತ್ ಸಪ್ತಾಹ' ದ ಪ್ರಯುಕ್ತ ರಾಷ್ಟ್ರಮಟ್ಟದಲ್ಲಿ ವಿದ್ಯಾರ್ಥಿಗಳಿಗಾಗಿ ಪ್ರಬಂಧ ಸ್ಪರ್ಧೆಯೊಂದನ್ನು ಏರ್ಪಡಿಸಲಾಗಿದೆ. "ಪ್ರವಾದಿ ಮುಹಮ್ಮದ್ (ಸ)-ಇತಿಹಾಸ ನಿರ್ಮಾತೃ" ಎಂಬ ವಿಷಯದಲ್ಲಿ ಇಂಗ್ಲಿಷ್ ಅಥವಾ ಹಿಂದಿ ಭಾಷೆಗಳಲ್ಲಿ ಪ್ರಬಂಧವನ್ನು ಬರೆಯಬೇಕು. ಇಪ್ಪತ್ತೈದು ವರ್ಷ ಮೀರದ, ಸ್ನಾತಕೋತ್ತರ ಅಥವಾ ಪದವಿ ಮತ್ತು ಪದವಿಪೂರ್ವ ಮಟ್ಟದ ವಿದ್ಯಾರ್ಥಿಗಳು ಈ ಸ್ಪರ್ಧೆಯಲ್ಲಿ ಭಾಗವಹಿಸಬಹುದು. ತಮ್ಮ ಪ್ರಬಂಧದೊಂದಿಗೆ ಸ್ಪರ್ಧಿಗಳು ತಮ್ಮ ವಿದ್ಯಾ ಸಂಸ್ಥೆಯ ದೃಢೀಕರಣ ಪತ್ರ ಮತ್ತು ಮೆಟ್ರಿಕ್ಯುಲೇಶನ್ ಸರ್ಟಿಫಿಕೇಟನ್ನು ಲಗತ್ತಿಸಬೇಕು. ಪ್ರಬಂಧವು ಮೂರು ಸಾವಿರ ಶಬ್ದಗಳನ್ನು ಮೀರಿರಬಾರದು.

ವಿಜೇತರಿಗೆ ಬಹುಮಾನವನ್ನು 1990 ಅಕ್ಟೋಬರ್ 7 ರಂದು ನೀಡಲಾಗುವುದು. ಪ್ರಥಮ ಬಹುಮಾನ ರೂ. 1000, ದ್ವಿತೀಯ ಬಹುಮಾನ ರೂ. 800, ತೃತೀಯ ಬಹುಮಾನ ರೂ 700 ಹಾಗೂ ಇತರ ಬಹುಮಾನಗಳನ್ನು ನೀಡಲಾಗುವುದು. ಅಂತೆಯೇ ದೆಹಲಿಗೆ ಹೋಗಿಬರಲು ರೈಲ್ವೇ ಟಿಕೇಟನ್ನು ನೀಡಲಾಗುವುದು.

ಪ್ರಬಂಧವನ್ನು ಬೆರಳಚ್ಚು ಮಾಡಿದ್ದು ಅಥವಾ ಕೈ ಬರಹದಲ್ಲಿಯೇ ಸ್ಪಷ್ಟವಾಗಿ ಬರೆದಿರಬೇಕು. ಕೊನೆಯ ದಿನಾಂಕ : 1990 ಆಗಸ್ಟ್ 15ರೊಳಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಬೇಕು: S.I.O Head-Quarters, 230, Abul-Fazal Enclave, Okhla, New-Delhi -25.

## ಪದಾಧಿಕಾರಿಗಳು

**ಸಾವರ್ಕರ್ ಯುವಕ ಸಂಘ, ಕುರುಕವಳ್ಳಿ, ಹಾಲ್ಮುತ್ತೂರು**

ಕೃಷ್ಣಮೂರ್ತಿ (ಅಧ್ಯಕ್ಷ), ಎ. ರಮೇಶ್ (ಉಪಾಧ್ಯಕ್ಷ), ಸೋಮಶೇಖರ (ಕಾರ್ಯದರ್ಶಿ), ಶಿವಪ್ಪ ನಾಯ್ಕ (ಸಹ ಕಾರ್ಯದರ್ಶಿ), ಕೆ. ಎಸ್. ವಿಶ್ವನಾಥ್ (ಖಜಾಂಚಿ), ಕೆ. ನಾಗರಾಜ್ ಮತ್ತು ಮಂಜಪ್ಪಯ್ಯ (ಸಲಹೆಗಾರರು).

**ಆರೋಗ್ಯ ಮಾರ್ಗದರ್ಶಿಗಳ ಸಂಘ, ಶೃಂಗೇರಿ ತಾ||**

ಕೆ. ಎ. ಶಿವಪ್ಪ (ಅಧ್ಯಕ್ಷ), ಶ್ರೀಮತಿ ಕಮಲಾಕ್ಷಿ (ಉಪಾಧ್ಯಕ್ಷೆ), ಚಂದ್ರಶೇಖರ ನಾಯ್ಕ (ಕಾರ್ಯದರ್ಶಿ), ಶ್ರೀನಾಥ್ (ಸಹ ಕಾರ್ಯದರ್ಶಿ).

# ಕೊಪ್ಪ ಜೀವವಿಮಾ ಶಾಖೆಯ ಪ್ರಗತಿ

(3ನೇ ಪುಟದಿಂದ)

ಸ್ವಂತ ಮನೆ ಕಟ್ಟಲು 21 ಜನರಿಗೆ ಸಾಲ ಸೌಲಭ್ಯ ನೀಡಿದ ಶಾಖೆಯು ಪಾಲಿಸಿ ಸೇವಾ ಕಾರ್ಯದಲ್ಲೂ ಉತ್ತಮ ಕಾರ್ಯ ನಿರ್ವಹಿಸುತ್ತಿದೆ ಶಾಖಾ ಸಿಬ್ಬಂದಿಯಿಂದ ಉತ್ತಮ ಸಹಕಾರ ಪಡೆದು, ಶಾಖೆಯನ್ನು ಪ್ರಗತಿಯತ್ತ ಕೊಂಡೊಯ್ಯುವಲ್ಲಿ ಶಾಖಾಧಿಕಾರಿ ಎಂ. ರಾಮಚಂದ್ರ ರಾಯರು ಅತ್ಯಂತ ಯಶ ಪಡೆದಿದ್ದಾರೆಂದು ಅವರು ತಿಳಿಸಿದರು.

ಪ್ರತಿನಿಧಿಗಳು ಕಳೆದ ವರ್ಷಗಳ ಇಮ್ಮಡಿ ಸಾಧನೆಯನ್ನು ಸಾಧಿಸುವಂತಾಗಲೆಂದು ಹಾರೈಸಿದ ಕೃಷ್ಣಮೂರ್ತಿ, ಹೊಸ ಶಾಖಾಧಿಕಾರಿಗಳೂ ಸಹ ಉತ್ತಮ ಸಹಕಾರ ನೀಡುವಂತಾಗಲಿ ಎಂದರು.

ಕಾರ್ಯದರ್ಶಿ ಎ. ರಾಮಣ್ಣ ಹೆಗ್ಡೆ ಸ್ವಾಗತಿಸಿ, ಬಿ. ಎನ್. ವೆಂಕಟರಮಣ ವಂದಿಸಿದರು.

### ಬೀಳ್ಕೊಡುಗೆ

ಶಾಖೆಯ ಸ್ಥಾಪಕ ಶಾಖಾಧಿಕಾರಿಯಾಗಿ 3 ವರ್ಷ ಯಶಸ್ವೀ ಸೇವೆ ಸಲ್ಲಿಸಿ ಕಡೂರು ಶಾಖೆಗೆ ವರ್ಗವಾಗಿರುವ ರಾಮಚಂದ್ರ ರಾಯರಿಗೆ ವಿಮಾ ಪ್ರತಿನಿಧಿಗಳು ಮತ್ತು ಅಭಿವೃದ್ಧಿ ಅಧಿಕಾರಿಗಳು ಪಿ.ಜಿ. ಗುರ್ಜರ್ ರವರ ಅಧ್ಯಕ್ಷತೆಯಲ್ಲಿ ನಾಗರಿಕ ವಿದಾಯ ಸಮಾರಂಭ ಏರ್ಪಡಿಸಿದ್ದರು.

ಶಾಖಾಧಿಕಾರಿ ರವಿರಾಜ ಶೆಟ್ಟಿ, ಹಿರಿಯ ಪ್ರತಿನಿಧಿ ಕೋದಂಡರಾಮಭಟ್ ಹಾಗೂ ಹಲವು ಮಂದಿ ಪ್ರತಿನಿಧಿಗಳು ಮತ್ತು ಅಭಿವೃದ್ಧಿ ಅಧಿಕಾರಿಗಳು ರಾಮಚಂದ್ರರಾಯರನ್ನು ಅಭಿನಂದಿಸಿ ಮಾತನಾಡಿದರು. ರಾವ್ ತಮ್ಮ ಅವಧಿಯಲ್ಲಿ ಸಹಕಾರ ನೀಡಿದ ಎಲ್ಲರಿಗೂ ಕೃತಜ್ಞತೆ ಸಲ್ಲಿಸಿದರು.

ಎಸ್. ಜಿ. ಕೃಷ್ಣಮೂರ್ತಿ ಸ್ವಾಗತಿಸಿ, ಬಿ. ಎನ್. ವೇಂಕಟರಮಣ ವಂದಿಸಿದರು.

## ಕೊಪ್ಪ ರೋಟರಿ ಪದಗ್ರಹಣ ಸಮಾರಂಭ

ಕೊಪ್ಪ : ಇಲ್ಲಿನ ರೋಟರಿ ಕ್ಲಬ್‌ನ ನೂತನ ಪದಾಧಿಕಾರಿಗಳ ಪದಗ್ರಹಣ ಸಮಾರಂಭ ಜು. 12ರಂದು ನಡೆಯಿತು. ಮಂಡಲ ಪ್ರಧಾನ ಪಿಬಿ ವಿವೇಕ್‌ನಾಯಕ್ ತಹಸೀಲ್ದಾರ್ ಜಿ. ಎಸ್. ನಾಯಕ್ ಮುಖ್ಯ ಅತಿಥಿಗಳಾಗಿದ್ದರು. ರೋಟರಿ ಡಿಸ್ಟ್ರಿಕ್ಟ್ 318ರ ವರ್ಲ್ಡ್ ಕಮ್ಯುನಿಟಿ ಸರ್ವಿಸ್‌ನ ಅಧ್ಯಕ್ಷ ಎಂ.ಕೆ. ಗೋವರ್ಧನ ಕುಮಾರ್ ಪದವಿದಾನ ನೆರವೇರಿಸಿದರು. ಅಬು ಮಹಮದ್ ಅಧ್ಯಕ್ಷರಾಗಿ, ಕರಿಗೆರಸಿಯ ಎಸ್. ಉಮೇಶ್ ಕಾರ್ಯದರ್ಶಿಯಾಗಿ ಅಧಿಕಾರ ಸ್ವೀಕರಿಸಿದರು.

ಜಿ. ಸಿ. ಗೋಪಾಲಕೃಷ್ಣ ಸ್ವಾಗತಿಸಿ, ಐ.ಎಂ. ದುಗ್ಗಪ್ಪಗೌಡ ವಂದಿಸಿದರು.

ಕೊಪ್ಪ ಆಸ್ಪತ್ರೆಯ ಒಳ ರೋಗಿಗಳಿಗೆ ಆಹಾರ ಸರಬರಾಜು ಮಾಡುವ ಹೊಣೆಯನ್ನು ಈ ಬಾರಿ ರೋಟರಿ ಕ್ಲಬ್ ವಹಿಸಿಕೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್. ಅಚ್ಚು : ದೀವಟಿಗೆ ಅಚ್ಚುಕೂಟ, ಕೊಪ್ಪ